# ಕಿತ್ತೂರಿನ ಉದಯ ಹಾಗೂ ಸಂಸ್ಥಾನದ ಜೊತೆಗೆ ಕಲ್ಮಠದ ರಾಜಗುರುಗಳ ಸಂಬಂಧ

ಸಿ.ವ್ಹಿ. ಮಠದ

ಸ್ವಾತಂತ್ರ್ಯ ಹೋರಾಟದ ಪ್ರಥಮ ಬೆಳ್ಳಿಚುಕ್ಕಿ ಎಂದು ಹೆಸರಾದ ಕಿತ್ತೂರ ರಾಣಿ ಚೆನ್ನಮ್ಮನ ಗುರು ಪರಂಪರೆ ವ್ಯವಸ್ಥಿತವಾಗಿ ಇತಿಹಾಸದ ಪುಟಗಳಲ್ಲಿ ಮುಚ್ಚಿಹೋಗಿವೆ. ಕಿತ್ತೂರ ರಾಜಮನೆತನದ ನಿರ್ಮಾಣದಲ್ಲಿ ಈ ಗುರುವರ್ಗದವರು ಪ್ರಮುಖ ಪಾತ್ರ ವಹಿಸಿದ್ದರು. ಪ್ರಸ್ತುತ ಲೇಖನ ಈ ಗುರುವರ್ಗದ ಬಗೆಗೆ ಬೆಳಕು ಚೆಲ್ಲುವ ಒಂದು ಪ್ರಾಮಾಣಿಕ ಪ್ರಯತ್ನ.

ದಾಖಲೆಗಳಿಂದ ತಿಳಿದು ಬರುವಂತೆ ಕಿತ್ತೂರ ಸಂಸ್ಥಾನ ಉದಯವಾದುದು ಕ್ರಿ.ಶ. ೧೫೫೫ರಲ್ಲಿ. ಆದರೆ ಅಲ್ಲಿ ರಾಜ್ಯಭಾರ ನಡೆದುದು ಕ್ರಿ.ಶ. ೧೬೬೦ರಲ್ಲಿ. ಕಿತ್ತೂರಿನಲ್ಲಿಯೇ ಕೋಟೆ ನಿರ್ಮಿಸಿ ಆಡಳಿತ ಪ್ರಾರಂಭಿಸಿದವರು ಐದನೆಯವರಾದ ಅಲ್ಲಪ್ಪಗೌಡ ಸರದೇಸಾಯರು. ಆಕರಗಳಿಂದ ತಿಳಿಯುವಂತೆ ಮೊದಲು ಇವರು ತಮ್ಮ ಆಳ್ವಿಕೆಯನ್ನು ಸಂಪಗಾವಿಯಲ್ಲಿ ಪ್ರಾರಂಭಿಸಿದರು. ಆದರೆ ಸಂಪಗಾವಿಯಿಂದ ಕಿತ್ತೂರಿಗೆ ಬಂದುದು ಹೇಗೆ ? ಎನ್ನುವ ವಿಚಾರದಲ್ಲಿ ಕಿತ್ತೂರಿನ ಬಗೆಗೆ ಮಾಹಿತಿ ನೀಡುವ ಯಾವ ಗ್ರಂಥದಲ್ಲಿಯೂ ಸ್ಪಷ್ಟವಾದ ಉಲ್ಲೇಖವಿಲ್ಲ. ಈ ವಿಷಯವಾಗಿ ಕಿತ್ತೂರ ಸಂಸ್ಥಾನದ ಕಲ್ಮಠದ ಕೊನೆಯ ಅಧಿಕಾರಿಗಳಾದ ಶ್ರೀ.ನಿ.ಪ್ರ. ಚೆನ್ನಬಸವ ಸ್ವಾಮಿಗಳನ್ನು ಪ್ರತ್ಯಕ್ಷ ಕಂಡು ವಿಚಾರಿಸಿದಾಗ ಅನೇಕ ಹೊಸ ವಿಚಾರಗಳು ಬೆಳಕಿಗೆ ಬಂದವು. ಆಧಾರಸಹಿತ ಈ ವಿಷಯದ ಬಗೆಗೆ ಚರ್ಚೆ ಮಾಡಿ ಅವರಿಂದ ಪಡೆದ ಕಿತ್ತೂರಿನ ಇತಿಹಾಸ ಕುರಿತಾದ ಕೆಲವು ಹೊಸ ವಿಷಯಗಳನ್ನು ವಿವೇಚಿಸಲು ಇಲ್ಲಿ ಯತ್ನಿಸಲಾಗಿದೆ.

ಕಿತ್ತೂರಿಗೆ ಮೊದಲು 'ಗೀಜಗನ ಹಳ್ಳಿ' ಎಂದು ಕರೆಯಲಾಗುತ್ತಿತ್ತು. ಹದಿನಾರನೆಯ ಶತಮಾನದ ಆದಿಯಲ್ಲಿ ಈ ಪ್ರದೇಶವೆಲ್ಲ ದಟ್ಟವಾದ ಅರಣ್ಯದಿಂದ ಕೂಡಿದ್ದು, ನೋಡಿದಲ್ಲೆಲ್ಲ ವಿಶಾಲ ಮರಗಳು, ಬಿದುರಿನ ಪೊದೆಗಳು ಬೆಳೆದುದರಿಂದ ಸೂರ್ಯಕಿರಣಗಳೂ ಸಹ ಭೂಮಿಯನ್ನು ಸ್ಪರ್ಶಿಸುತ್ತಿರಲಿಲ್ಲ. ಅಂತೆಯೇ ಕಾಡುಪ್ರಾಣಿಗಳು, ವಿವಿಧ ರೀತಿಯ ಪಕ್ಷಿಗಳು ಇಲ್ಲಿ ಆಶ್ರಯ ಪಡೆದಿದ್ದವು. ವಿಶೇಷವಾಗಿ ಇಲ್ಲಿ ಗೀಜಗನ ಹಕ್ಕಿಗಳು ಗುಂಪುಗಟ್ಟಲೆ ಬಹುಸಂಖ್ಯೆಯಲ್ಲಿ ವಾಸವಾಗಿದ್ದವು. ಅಂತೆಯೇ ಈ ಪ್ರದೇಶಕ್ಕೆ 'ಗೀಜಗನ ಹಳ್ಳಿ ಎಂದು ಕರೆದಿರಬಹುದು.

ನಿರ್ಜನ ಪ್ರದೇಶವಾದ ಈ ದಟ್ಟಡವಿಯಲ್ಲಿ ಬಿದಿರು ಪೊದೆಯೊಳಗೇ ಯೋಗಾಶ್ರಮವನ್ನು ನಿರ್ಮಿಸಿಕೊಂಡು ಬಿಟ್ಟು ಶಿವಯೋಗ ಸಿದ್ಧರು ಅನುಷ್ಠಾನ ನಿಷ್ಠರಾಗಿದ್ದರು. ಸಂಪಗಾವಿಯಲ್ಲಿ ಆಡಳಿತ ನಡೆಸಿದ ಐದನೆಯವರಾದ ಅಲ್ಲಪ್ಪಗೌಡ ಸರದೇಸಾಯರಿಗೆ ಸ್ವಪ್ನದಲ್ಲಿ ದಟ್ಟಡವಿಯಲ್ಲಿಯ ಆಶ್ರಮವಾಸಿಗಳಾದ ಮುನಿಗಳ ದರ್ಶನವಾಯಿತು. ಹಾಗೆಯೇ ತಮ್ಮ ದರ್ಶನ ಪಡೆಯಬೇಕೆಂದು ಮುನಿಗಳು ಆಜ್ಞಾಪಿಸಿದರು. ನಿದ್ರೆಯಿಂದ ಎಚ್ಚೆತ್ತ ನಂತರ ಸ್ವಪ್ನಗಳ ಬಗ್ಗೆ ನಂಬಿಕೆ ಇಟ್ಟುಕೊಂಡ ದೇಸಾಯರು ವಿಚಾರ ಪರವಶರಾದರು. ಕೆಲವು

ಸೇವಕರನ್ನೊಳಗೊಂಡು ಆ ಪ್ರದೇಶದತ್ತ ಪಯಣ ಬೆಳೆಸಿದರು. ದಟ್ಟಡವಿಯನ್ನು ಕ್ರಮಿಸುತ್ತಿದ್ದಂತೆ ಆಶ್ರಮ ಕಣ್ಣಿಗೆ ಬಿದ್ದಿತು. ಸಾವಕಾಶವಾಗಿ ಕುದುರೆ ಯಿಂದ ಇಳಿದು ಆಶ್ರಮ ಪ್ರವೇಶ ಮಾಡಿದ ದೇಸಾಯರಿಗೆ ತಾವು ಸ್ವಪ್ನದಲ್ಲಿ ಕಂಡ ಮುನಿಗಳೇ ಎದುರಿಗೆ ಧ್ಯಾನಾ ಸಕ್ತರಾಗಿ ಕುಳಿತದ್ದು ಕಣ್ಣಿಗೆ ಬಿದ್ದಿತು. ಆನಂದಭರಿತ ರಾದ ದೇಸಾಯರು ಅವರ ಪಾದಕಮಲಗಳಿಗೆ ನಮಸ್ಕರಿಸಿದರು. ಕಣ್ಣೆದುರು ನೋಡಿದ ಸ್ವಾಮಿಗಳು ದೇಸಾಯರನ್ನು ಆಶೀರ್ವದಿಸಿ ಪ್ರಸಾದವಿತ್ತರು. ಹಾಗೆಯೇ ದೇಸಾಯರನ್ನು ಸಂಬೊಧಿಸಿ "ಅಯ್ಯಾ ನಿನ್ನಿಂದ ಕರ್ನಾಟಕಕ್ಕೆ ಹಾಗೂ ಈ ನಾಡಿಗೆ ಮಹತ್ ಕಾರ್ಯವಾಗಬೇಕಾಗಿದೆ. ಇನ್ನುಮುಂದೆ ನೀನು ಇದೇ ಸ್ಥಳದಲ್ಲಿ ವಾಸಮಾಡಿ ಆಡಳಿತ ನಡೆಸಬೇಕು" ಎಂದು ಅಪ್ಪಣೆ ಕೊಟ್ಟರು. ಭಕ್ತಿನಿಷ್ಠ ಶರಣರಾದ ಅಲ್ಲಪ್ಪ ದೇಸಾಯರು ಯೋಗಿಗಳ ಮಾತಿಗೆ ಒಪ್ಪಿಗೆ ಸೂಚಿಸಿ ಅವರ ಆಶೀರ್ವಾದ ಪಡೆದು ಸಂಪಗಾವಿಗೆ ಮರಳಿದರು. ಕೆಲವು ದಿನಗಳಲ್ಲಿಯೇ ತಮ್ಮ ಎಲ್ಲ ಸರಂಜಾಮುದೊಂದಿಗೆ ಬಂದು ಈ ಸ್ಥಳದಲ್ಲಿ ವಾಸಿಸಹತ್ತಿದರು. ಅಲ್ಲದೆ ಅರಣ್ಯ ವನ್ನು ಹಸನಾಗಿಸಿ ಸುಂದರವಾದ ಕೋಟೆಯನ್ನು ಹಾಗೆಯೇ ಗುರುಗಳ ವಾಸಕ್ಕಾಗಿ ಮಠವನ್ನು ಕಟ್ಟಿಸಿದರು. ಈ ರೀತಿ ಸಂಪಗಾವಿಯಿಂದ ಕಿತ್ತುಕೊಂಡು ಬಂದು ಇಲ್ಲಿ ವಾಸಿಸಿ ಹೊಸ ಪಟ್ಟಣವನ್ನೇ ನಿರ್ಮಿಸಿದುದ ರಿಂದ ಇದಕ್ಕೆ "ಕಿತ್ತೂರು" ಎಂಬ ನಾಮದೇಯ ಬಂದಿರಬಹುದು ಎಂಬ ತರ್ಕಬದ್ಧ ವಿಚಾರವನ್ನು ಶ್ರೀ.ನಿ.ಪ್ರ. ಚೆನ್ನಬಸವ ಸ್ವಾಮಿಗಳು ವಿವರಿಸಿದರು.

ಇನ್ನೊಂದು ವಿಶೇಷವೆಂದರೆ ಕಿತ್ತೂರಿನಲ್ಲಿ ಇಂದಿಗೂ ಕೂಡ ಗುರುವಾರ ಪೇಟೆ ಹಾಗೂ ಸೋಮವಾರ ಪೇಟೆ ಎಂಬ ಎರಡು ಬಡಾವಣೆಗಳಿವೆ. ಅಲ್ಲಪ್ಪಗೌಡ ಸರದೇಸಾಯರು ಪ್ರಥಮತಃ ಯೋಗಿಗಳ ದರುಶನ ಪಡೆದುದು ಗುರುವಾರ ನಂತರ ಸರಂಜಾಮುದೊಂದಿಗೆ ಈ ಪ್ರದೇಶದಲ್ಲಿ ವಾಸಿಸಲು ಬಂದುದು ಸೋಮವಾರ. ಅಂತೆಯೇ ಕಿತ್ತೂರಿನ ಈ ಎರಡು ಪೇಟೆಗಳಿಗೆ ಅನ್ವರ್ಥಕ ವಾಗಿ ಹೀಗೆ ಇಂದಿಗೂ ಕರೆಯುವದುಂಟು ಎಂಬ ವಿಚಾರವನ್ನೂ ಶ್ರೀನಿ.ಪ. ಚೆನ್ನಬಸವ ಸ್ವಾಮಿಗಳು ತಿಳಿಸಿದರು.

ಅಂದಿನಿಂದ ಸಿದ್ಧಪುರುಷರ ಆಶೀರ್ವಾದ ಪಡೆದ ದೇಸಾಯರ ಆಳ್ವಿಕೆ ಕಿತ್ತೂರಿನಲ್ಲಿ ಸುವ್ಯವಸ್ಥಿತವಾಗಿ ಮುಂದುವರೆದುಕೊಂಡು ಹೋಯಿತು. ಹಾಗೆಯೇ ಕಲ್ಮಠದಲ್ಲಿ ರಾಜಗುರುಗಳ ವಾಸ್ತವ್ಯವೂ ಮುಂದು ವರೆಯಿತು. ಇಂದಿಗೂ ಈ ರಾಜಗುರುಗಳ ಹಾಗೂ ರಾಜರುಗಳ ಮಧುರ ಸಂಬಂಧಗಳ ದ್ಯೋತಕವಾಗಿ ಕಲ್ಮಠದ ಸಮೀಪದಲ್ಲಿ ದೇಸಾಯರ ಗದ್ದುಗೆಗಳು ಹಾಗೂ ಹೊರವಲಯದಲ್ಲಿ ಇರುವ ಚೌಕಿಮಠದ ಸುತ್ತಲೂ ರಾಜಗುರುಗಳ ಗದ್ದುಗೆಗಳೂ ನಮಗೆ ನೋಡಲು ದೊರೆಯುತ್ತವೆ. ಇಲ್ಲಿ ಇನ್ನೊಂದು ವಿಶೇಷ ವಿಷಯ ವೆಂದರೆ ರಾಜಗುರುಗಳ ಜೀವಿತದ ನಿರ್ದಿಷ್ಟ ಕಾಲಮಾನ ನಮಗೆ ದೊರೆಯುತ್ತದೆ. ಅವರು ಎಷ್ಟು ವರ್ಷಗಳ ಕಾಲ ಹಾಗೂ ಯಾವ ದೇಸಾಯರ ಕಾಲದಲ್ಲಿ ವಾಸಿಸಿದ್ದರು ಎಂದು ತಿಳಿಯುವುದು. ಇದರಿಂದ ದೇಸಾಯರ ಆಳ್ವಿಕೆಯ ಕಾಲವನ್ನು ಗುರುತಿಸ ಬಹುದಾಗಿದೆ.

ಕಲ್ಮಠದ ಅಧಿಕಾರ ಹೊಂದಿದ ಮೊದಲ ಸ್ವಾಮಿ ಗಳು ಉಳವಿಯವರಾದ ಗುರುಸಿದ್ಧ ಮಹಾಸ್ವಾಮಿಗಳು. ಕ್ರಿ.ಶ. ೧೬೬೦ ರಿಂದ ೧೬೯೬ರವರೆಗೆ, ೩೬ ವರ್ಷ ಸಂಸ್ಥಾನ ಮಠದ ಅಧಿಕಾರ ವಹಿಸಿಕೊಂಡು ಮಂದಿ ಮಲ್ಲಪ್ಪ ದೇಸಾಯರಿಗೆ ಹಾಗೂ ಚಿಕ್ಕಯಲ್ಲಪ್ಪ ದೇಸಾಯರಿಗೆ ಮಾರ್ಗದರ್ಶನ ಮಾಡಿದರು. ಈ ಸ್ವಾಮಿಗಳ ಗದ್ದುಗೆಯನ್ನು ಏಳನೆಯವರಾದ ಚಿಕ್ಕಮಲ್ಲಪ್ಪ ದೇಸಾಯರು ಕಟ್ಟಿಸಿದರು. ಈ ಗದ್ದುಗೆ ಇಂದಿಗೂ ಚೌಕಿಮಠದ ಹತ್ತಿರ ಉಪಲಬ್ಧವಿದೆ. ಉಳವಿ ಯಿಂದ ಈ ಸ್ವಾಮಿಗಳು ಬಂದುವರಾದುದರಿಂದ ಇಂದಿಗೂ ಉಳವಿಯಲ್ಲಿ "ಕಲ್ಮಠ ಕಟ್ಟಿ" ಎಂಬ ಹೆಸರಿನ ಶಾಖಾಮಠವಿದೆ. ಕಾಲಾನಂತರ ಚಿತ್ರದುರ್ಗ ಸ್ವಾಮಿಗಳು ಆ ಕಟ್ಟಿಯನ್ನು ತಮ್ಮ ಅಧಿಕಾರ ವ್ಯಾಪ್ತಿಗೆ ತೆಗೆದುಕೊಂಡರು ಎಂಬ ಸಂಗತಿಯನ್ನು ಶ್ರೀ ಚೆನ್ನಬಸವ ಶ್ರೀಗಳು ವಿವರಿಸಿದರು.

ಎರಡನೆಯವರಾಗಿ ತೋಲಗಿಯ ಪಾದಶ್ರೀಗಳು ೧೬೯೬ ರಿಂದ ೧೭೩೪ರ ವರೆಗೆ ೨೬ ವರ್ಷ ಚಿಕ್ಕಮಲ್ಲಪ್ಪ ದೇಸಾಯರಿಗೆ ಹಾಗೂ ಶಿವನಗೌಡ ದೇಸಾಯರಿಗೆ ಮಾರ್ಗದರ್ಶನ ಮಾಡಿದರು. ಇವರ ಗದ್ದುಗೆಯನ್ನು

ಲನೆಯವರಾದ ಶಿವನಗೌಡ ದೇಸಾಯರು ಕಟ್ಟಿಸಿದರು. ಈ ಗದ್ದುಗೆ ಕೂಡ ಇಂದು ಜೇಕಿಮಠದ ಬಳಿ ಸಿಗುವುದು.

ಮೂರನೆಯವರಾಗಿ ಉಪ್ಪಿನ ಬೆಟಗೇರಿಯವರಾದ ಗುರುಲಿಂಗ ಶ್ರೀಗಳು ೧೭೨೩ ರಿಂದ ೧೭೫೭ರ ವರೆಗೆ ೩೪ ವರ್ಷ ಮಲವರುದ್ರಗೌಡ ಹಾಗೂ ವೀರಪ್ಪ ದೇಸಾಯರಿಗೆ ಮಾರ್ಗದರ್ಶನ ಮಾಡಿದರು. ಇವರ ಗದ್ದುಗೆಯನ್ನು ವೀರಪ್ಪದೇಸಾಯರು ಕಟ್ಟಿಸಿದರು.

ನಾಲ್ಕನೆಯವರಾಗಿ ದೇಶನೂರಿನ ಮಡಿವಾಳ ಶ್ರೀಗಳು ೧೭೫೭ ರಿಂದ ೧೮೦೧ ರವರೆಗೆ ೪೪ ವರ್ಷಗಳ ಕಾಲ ಇದ್ದು ವೀರಪ್ಪದೇಸಾಯರಿಗೆ ಹಾಗೂ ಮಲ್ಲಸರ್ಜ ದೊರೆಗಳಿಗೆ ಮಾರ್ಗದರ್ಶನ ಮಾಡಿದರು. ಇವರ ಗದ್ದುಗೆಯನ್ನು ಮಲ್ಲಸರ್ಜ ದೊರೆ ಕಟ್ಟಿಸಿದರು. ಇದೂ ಕೂಡ ಇಂದು ನೋಡಲು ಸಿಗುತ್ತದೆ.

ಐದನೆಯವರಾಗಿ ಶಹಾಪೂರಿನ ಪ್ರಭು ಶ್ರೀಗಳು ಕ್ರಿ.ಶ. ೧೮೦೧ ರಿಂದ ೧೮೦೬ರ ವರೆಗೆ ೧೫ ವರ್ಷಗಳ ಕಾಲ ಇದ್ದು ಮಾರ್ಗದರ್ಶನ ಮಾಡಿದರು. ಇವರ ಗದ್ದುಗೆಯನ್ನು ೧೨ನೆಯವರಾದ ಶಿವಲಿಂಗರುದ್ರ ಸರ್ಜ ದೇಸಾಯರು ಕಟ್ಟಿಸಿದರು.

ಆರನೆಯದಾಗಿ ಗಂದಿಗೆವಾಡದ ಗುರುಸಿದ್ಧ ಶ್ರೀಗಳು ೧೮೧೬ ರಿಂದ ೧೮೩೮ರ ವರೆಗೆ ೨೨ ವರ್ಷ ರಾಜಗುರುಗಳಾಗಿ ಮಾನ್ಯತೆ ಪಡೆದರು. ಇವರ ಕಾಲಕ್ಕೆ ಕಿತ್ತೂರನಾಡಿನ ಚರಿತ್ರೆಯಲ್ಲಿ ಮಹತ್ವದ ಘಟನೆಗಳೂ ಸಂಭವಿಸಿದವು. ಹಾಗೆಯೇ ಕಿತ್ತೂರ ಸಂಸ್ಥಾನದ ಅಂತ್ಯವೂ ಕೂಡ ಇದೇ ಕಾಲಕ್ಕೆ ಆಯಿತು. ರಾಜಮನೆತನ ಕೊನೆಗೊಂಡರೂ ಗುರು ಪರಂಪರೆ ಮುಂದುವರೆದುಕೊಂಡು ಹೋಯಿತು. ಬ್ರಿಟೀಷ್ ಸರ್ಕಾರ ಈ ಸಂಸ್ಥಾನವನ್ನು ತಮ್ಮ ವಶಕ್ಕೆ ತೆಗೆದುಕೊಂಡರೂ ಮಠದ ಪರಂಪರೆಗೆ ಯಾವ ಧಕ್ಕೆ ಆಗದಂತೆ ನೋಡಿಕೊಂಡರು. ಇವರ ಅಧಿಕಾರ ರಾಜಕೀಯಕ್ಕೆ ಮಾತ್ರ ಸೀಮಿತವಾಗಿತ್ತು. ಧರ್ಮದಲ್ಲಿ ಕೈ ಹಾಕಿ ಸಾಮಾನ್ಯ ಜನರ ಭಾವನೆಗಳನ್ನು ಕೆರಳಿಸುವುದು ಬ್ರಿಟೀಷರಿಗೆ ಬೇಡವಾಗಿತ್ತು.

ನಂತರ ಏಳನೆಯವರಾಗಿ ತೋಲಗಿಯ ಮಡಿವಾಳ ಶ್ರೀಗಳು ೧೮೩೮ ರಿಂದ ೧೮೫೭ರ ವರೆಗೆ ೧೯ ವರ್ಷ ಇದ್ದು ಜನತೆಯಲ್ಲಿ ಧಾರ್ಮಿಕ ಪ್ರಜ್ಞೆ ಹೆಚ್ಚಿಸುವಂತೆ ಶ್ರಮಿಸಿದರು.

ಎಂಟನೆಯವರಾಗಿ ನಂದಗಡದ ರಾಚೋಟಿ ಸ್ವಾಮಿಗಳು ೧೮೫೭ ರಿಂದ ೧೮೭೯ರ ವರೆಗೆ ೨೨ ವರ್ಷ ಸಮಾಜದ ಜನತೆಗೆ ಮಾರ್ಗದರ್ಶನ ಮಾಡಿದರು.

ಒಂಭತ್ತನೆಯವರಾಗಿ ಗಂದಿಗೆವಾಡದ ಗುರುಸಿದ್ಧ ಶ್ರೀಗಳು ೧೮೭೯ ರಿಂದ ೧೯೩೪ರ ವರೆಗೆ ೫೫ ಅತಿ ದೀರ್ಘ ಕಾಲ ಬದುಕಿ–ಬಾಳಿ ಧರ್ಮ ರಕ್ಷಣೆಗೆ ಹೆಣಗಿದರು.

ಹತ್ತನೆಯವರಾಗಿ ಬೆಳವಡಿಯ ಶ್ರೀ ಚೆನ್ನಬಸವಶ್ರೀಗಳು ೧೯೩೪ರಲ್ಲಿ ಅಧಿಕಾರ ವಹಿಸಿಕೊಂಡರು. ಆದರೆ ಕೆಲ ವರುಷಗಳ ನಂತರ ಮಠವನ್ನು ತ್ಯಜಿಸಿ ಬೆಳಗಾವಿಯಲ್ಲಿಯೇ ವಾಸಿಸುತ್ತಿದ್ದರು. ಇವರು ಇತ್ತೀಚೆಗೆ ಎರಡು ವರ್ಷಗಳ ಹಿಂದೆಯಷ್ಟೇ ಶಿವಾಧೀನರಾದರು. ಇವರು ಕೂಡ ೬೫ ವರ್ಷಗಳ ಕಾಲ ಬದುಕಿದ್ದರು. ಇವರಲ್ಲಿ ಕಿತ್ತೂರಿಗೆ ಸಂಬಂಧಿಸಿದ ಹಾಗೂ ಬೆಳವಡಿಗೆ ಸಂಬಂಧಿಸಿದ ಅನೇಕ ಕಾಗದ ಪತ್ರಗಳನ್ನು ನಾವು ಕಾಣಬಹುದಾಗಿದೆ. ಸುದೈವದಿಂದ ಅವರ ಜೀವಿತಕಾಲದಲ್ಲಿ ಅವರನ್ನು ಕಂಡು ಅವರ ಜೊತೆ ಚರ್ಚಿಸಿದುದರ ಪರಿಣಾಮವಾಗಿ ಮೇಲಿನ ಮಾಹಿತಿಯನ್ನು ತಮ್ಮೆದುರು ಮಂಡಿಸಲು ಶಕ್ತನಾಗಿದ್ದೇನೆ.

ಪ್ರತಿಯೊಬ್ಬ ಸ್ವಾಮಿಗಳ ಮೂಲ ಊರುಗಳಲ್ಲಿ ಇಂದಿಗೂ ಕಲ್ಮಠದ ಶಾಖಾಮಠಗಳನ್ನು ನಾವು ಕಾಣುತ್ತೇವೆ. ಹೀಗೆ ಈ ಕಲ್ಮಠದ ಪರಂಪರೆ ಕಿತ್ತೂರ ಸಂಸ್ಥಾನಿಕರು ಕಿತ್ತೂರಿನಲ್ಲಿ ನೆಲೆಸಿದಾಗಿನಿಂದಲೇ ಪ್ರಾರಂಭವಾಯಿತು. ಇಂದಿಗೂ ಕೂಡ ಕಿತ್ತೂರಿನಲ್ಲಿರುವ ಕಲ್ಮಠ ತನ್ನ ಪರಂಪರೆಯನ್ನು ಮುಂದುವರೆಸಿಕೊಂಡು ನಡೆದಿದೆ. O